# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1606 (1850)

2) ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 22.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಹುಲಿ ಮತ್ತು ಕಾಡಾನೆಗಳು ಕಾಡಿನಿಂದ ಹೊರಬಂದು ಗ್ರಾಮಗಳು, ಕಾಫಿ ತೋಟಗಳು ಹಾಗೂ ಇತರೆ ಜಮೀನುಗಳಲ್ಲಿ ಸಂಚರಿಸುತ್ತಿರುವುದರಿಂದ, ರೈತರು ಹಾಗೂ ಸಾರ್ವಜನಿಕರು ಭಯದ ವಾತಾವರಣದಲ್ಲೇ ಬದುಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಕಳೆದ ಮೂರು ವರ್ಷಗಳಲ್ಲಿ ಗ್ರಾಮಗಳು, ಕಾಫಿ ತೋಟಗಳು ಹಾಗೂ ಇತರೆ ಜಮೀನುಗಳಲ್ಲಿ ಬೀಡು ಬಿಟ್ಟಿರುವ ಅಥವಾ ಸಂಚರಿಸುತ್ತಿರುವ ಎಷ್ಟು ಹುಲಿ ಮತ್ತು ಕಾಡಾನೆಗಳನ್ನು ಸೆರೆಹಿಡಿಯಲಾಗಿದೆ ಹಾಗೂ ಎಲ್ಲಿಗೆ ಸ್ಥಳಾಂತರ ಮಾಡಲಾಗಿದೆ; | ಕಳೆದ ಮೂರು ವರ್ಷಗಳಲ್ಲಿ ಹುಲಿ ಮತ್ತು ಕಾಡಾನೆಗಳನ್ನು ಸೆರೆ ಹಿಡಿದು ಸ್ಥಳಾಂತರಿಸಿದ ವಿವರ ಈ ಕೆಳಕಂಡಂತಿದೆ. (see table below) |
| ಇ) | ಈ ರೀತಿಯಲ್ಲಿ ನಿರಂತರವಾಗಿ ನಡೆಯುತ್ತಿರುವ ವನ್ಯಜೀವಿ-ಮಾನವ ಸಂಘರ್ಷ ತಪ್ಪಿಸಲು ಜಿಲ್ಲೆಯಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | **ಮಾನವ-ವನ್ಯಪ್ರಾಣಿ ಸಂಘರ್ಷವನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ವಹಿಸಲಾಗುತ್ತಿದೆ:-**<br>• ಆನೆ ತಡೆಕಂದಕ ನಿರ್ಮಾಣ/ನಿರ್ವಹಣೆ<br>• ಸೋಲಾರ್ ತಂತಿ ಬೇಲಿ ನಿರ್ಮಾಣ/ನಿರ್ವಹಣೆ<br>• ತೂಗು ಸೋಲಾರ್ ತಂತಿ ಬೇಲಿ ನಿರ್ಮಾಣ/ನಿರ್ವಹಣೆ<br>• ಉಪಯೋಗಿತ ರೈಲು ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಾಣ<br>• ಕೊಡಗು ಜಿಲ್ಲೆಯ ಅರಣ್ಯ ವೃತ್ತದ ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯನ್ನು ತುರ್ತು ನಿರ್ವಹಣೆ ಕ್ಷಿಪ್ರ ಸ್ಪಂದನ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸಲಾಗುತ್ತಿದೆ. |

| ವರ್ಷ | 2018-19 | 2019-20 | 2020-21 | ಸ್ಥಳಾಂತರ ಮಾಡಲಾದ ಸ್ಥಳ |
|---|---|---|---|---|
| ಹುಲಿ | - | - | 3 | ಮೈಸೂರಿನ ಕೂರ್ಗಳ್ಳಿ ಪುನರ್ ವಸತಿ ಕೇಂದ್ರ |
| ಆನೆ | 3 | - | - | ದುಬಾರೆ ಸಾಕಾನೆ ಶಿಬಿರ-1, ಮತ್ತಿಗೋಡು ಸಾಕಾನೆ ಶಿಬಿರ-2 |
| | - | 3 | - | ಕಾಕನಕೋಟೆ ಮೀಸಲು ಅರಣ್ಯ-1, ದುಬಾರೆ ಸಾಕಾನೆ ಶಿಬಿರ-2 |
| | - | - | 1 | ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶದ ಮೂಲೆ ಹೊಳೆ ಪ್ರದೇಶ |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | • ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ ಅವುಗಳ ಚಲನ ವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ.<br>• ಆಯ್ದ ವಲಯಗಳಲ್ಲಿ ಕಾಡಾನೆಗಳನ್ನು ಮರಳಿ ಕಾಡಿಗೆ ಓಡಿಸುವ ತಂಡ ರಚನೆ ಮಾಡಲಾಗಿರುತ್ತದೆ.<br>• ಕಾಡಾನೆ ಇರುವಿಕೆ ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯ ನಿರ್ವಹಿಸುತ್ತಿದೆ.<br>• ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಕಾಡಾನೆಗಳನ್ನು ಸೆರೆಹಿಡಿದು ಇಲಾಖಾ ಆನೆ ಶಿಬಿರಕ್ಕೆ/ಸೂಕ್ತ ಅರಣ್ಯ ಪ್ರದೇಶಕ್ಕೆ ಸ್ಥಳಾಂತರ ಮಾಡಲಾಗುತ್ತಿದೆ.<br>• ವನ್ಯಪ್ರಾಣಿಗಳ ರಕ್ಷಣಾ ದೃಷ್ಟಿಯಿಂದ ವನ್ಯಪ್ರಾಣಿ ಹತ್ಯೆತಡೆ ಶಿಬಿರಗಳನ್ನು ಸ್ಥಾಪನೆ ಮಾಡಿ ಪ್ರತಿ ದಿನ ಗಸ್ತು ಮಾಡಿ ಯಾವುದೇ ಅಕ್ರಮ ಚಟುವಟಿಕೆಗಳು ನಡೆಯದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>• ಈ ರಕ್ಷಣಾ ಕಾರ್ಯದ ಸಿಬ್ಬಂದಿಗಳಿಗೆ ಹಾಗೂ ಇಲಾಖಾ ಸಿಬ್ಬಂದಿಗಳಿಗೆ ವೈರ್‌ಲೆಸ್ ವಾಕಿ ಟಾಕಿ, ಶಸ್ತ್ರಾಸ್ತ್ರ ಆಹಾರ ಸಾಮಗ್ರಿಗಳನ್ನು ಒದಗಿಸಿ ಪರಿಣಾಮಕಾರಿಯಾಗಿ ರಕ್ಷಣಾ ಕಾರ್ಯ ಕೈಗೊಳ್ಳಲಾಗುತ್ತಿದೆ.<br>• ಹುಲಿ ಉಪಟಳ ಹೆಚ್ಚಾಗಿರುವ ಪ್ರದೇಶಗಳಲ್ಲಿ ಕ್ಯಾಮರಾ ಟ್ರಾಪ್‌ಗಳನ್ನು ಅಳವಡಿಸಿ ಹುಲಿಗಳ ಚಲನವಲನಗಳನ್ನು ನಿಗಾವಹಿಸಲಾಗುತ್ತಿದೆ.<br>• ಹುಲಿಗಳು ಕಾಡಂಚಿನ ಗ್ರಾಮಗಳಿಗೆ ದಾಳಿ ಮಾಡದಂತೆ ಇಲಾಖಾ ಆನೆಗಳನ್ನು ಉಪಯೋಗಿಸಿ ಆಯ್ದ ಗ್ರಾಮಗಳಲ್ಲಿ ಕೊಂಬಿಂಗ್ ಕಾರ್ಯಾಚರಣೆ ನಡೆಸಲಾಗುತಿದೆ.<br>• ನುರಿತ ಇಲಾಖಾ ಸಿಬ್ಬಂದಿ ಮತ್ತು ಪರಿಣಿತರಿಂದ ಹುಲಿ ಚಲನವಲನಗಳನ್ನು ಗಮನಿಸಲು ಇಲಾಖಾ ತಂಡಗಳನ್ನು ರಚಿಸಿ ಕಾರ್ಯ ನಿರ್ವಹಿಸಲಾಗುತ್ತಿದೆ.<br>• ಉಪಟಳ ನೀಡುತ್ತಿರುವ ಹುಲಿಗಳನ್ನು ಸೆರೆಹಿಡಿದು ಪುನರ್ ವಸತಿ ಕೇಂದ್ರಗಳಿಗೆ ಸ್ಥಳಾಂತರಿಸಲಾಗುತ್ತಿದೆ.<br>ಮಾನವ–ಪ್ರಾಣಿ ಸಂಘರ್ಷವನ್ನು ತಡೆಯಲು ತಕ್ಷಣದ ಕ್ರಮಗಳನ್ನು ತೆಗೆದುಕೊಳ್ಳಲು **"ಕೊಡಗು ಮಾನವ–ವನ್ಯಪ್ರಾಣಿ ಸಂಘರ್ಷ ಉಪಶಮನ ಪ್ರತಿಷ್ಠಾನ"** ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ. |

ಸಂಖ್ಯೆ: ಅಪಜೀ 74 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು